# ಕರ್ನಾಟಕ ವಿಧಾನ ಪರಿಷತ್

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2048 |
| ಸದಸ್ಯರ ಹೆಸರು | : | ಶ್ರೀಮತಿ ಎಸ್. ವೀಣಾ ಅಚ್ಚಯ್ಯ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 24-03-2021 |
| ಉತ್ತರಿಸುವ ಸಚಿವರು | : | ಮಾನ್ಯ ಕಂದಾಯ ಸಚಿವರು |

| ಪ್ರಶ್ನೆ | | ಉತ್ತರ |
|---|---|---|
| (ಅ) | ಕೊಡಗು ಜಿಲ್ಲೆಯ ಶನಿವಾರ ಸಂತೆ ಭಾಗದಲ್ಲಿ ಇತ್ತೀಚೆಗೆ ಮಂಜುಗಡ್ಡೆ ಸಹಿತ ಭಾರಿ ಮಳೆಯಿಂದ ಸಾಕಷ್ಟು ಬೆಳೆ ಹಾನಿಯಾಗಿ, ರೈತರು ತೀವ್ರ ಸಂಕಷ್ಟಕ್ಕೆ ಸಿಲುಕಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| (ಆ) | ಬಂದಿದ್ದಲ್ಲಿ, ಎಷ್ಟು ಮೊತ್ತದ ಮತ್ತು ಎಷ್ಟು ವಿಸ್ತೀರ್ಣದ ಬೆಳೆ ಹಾನಿಯನ್ನು ಅಂದಾಜು ಮಾಡಲಾಗಿದೆ; | ಕೊಡಗು ಜಿಲ್ಲೆಯ ಶನಿವಾರ ಸಂತೆ ಭಾಗದಲ್ಲಿ ಇತ್ತೀಚೆಗೆ ಮಂಜುಗಡ್ಡೆ ಸಹಿತ ಭಾರಿ ಮಳೆಯಿಂದಾಗಿರುವ ಬೆಳೆ ಹಾನಿ ವಿಸ್ತೀರ್ಣ ಮತ್ತು ಮೊತ್ತದ ಅಂದಾಜು ವಿವರ ಈ ಕೆಳಕಂಡಂತಿರುತ್ತದೆ. |

| ಕ್ರ. ಸಂ | ಹಾನಿ ವಿವರ | ಬೆಳೆಹಾನಿಯಾದ ವಿಸ್ತೀರ್ಣ (ಎಕರೆಗಳಲ್ಲಿ) | ಅಂದಾಜು ನಷ್ಟ (ರೂ.ಲಕ್ಷಗಳಲ್ಲಿ) |
|---|---|---|---|
| 1 | ಕಾಫಿ | 510.00 | 153.00 |
| 2 | ಜೋಳ | 175.00 | 35.00 |
| 3 | ಶುಂಠಿ | 109.00 | 16.35 |
| 4 | ಹಸಿರು ಮೆಣಸಿನಕಾಯಿ | 143.00 | 21.45 |
| 5 | ಸಿಹಿಗೆಣಸು | 93.00 | 13.95 |
| 6 | ಕಾಳುಮೆಣಸು | 240.00 | 36.00 |
| 7 | ಅಡಿಕೆ | 148.00 | 22.20 |
| 8 | ಬಾಳೆ | 137.00 | 20.55 |
| **ಒಟ್ಟು** | | **1555.00** | **318.50** |

| | | |
|---|---|---|
| (ಇ) | ಸದರಿ ನಷ್ಟಕ್ಕೀಡಾದ ರೈತರಿಗೆ ಸೂಕ್ತ ಪರಿಹಾರ ನೀಡಲಾಗಿದೆಯೇ; ಇದುವರೆಗೂ ಪರಿಹಾರ ನೀಡದಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಅವರಿಗೆ ಪರಿಹಾರ ನೀಡಲಾಗುವುದು? | ಕೃಷಿ, ತೋಟಗಾರಿಕೆ ಮತ್ತು ಕಂದಾಯ ಇಲಾಖೆಯ ಜಂಟಿ ಸಮೀಕ್ಷೆಯ ನಂತರ ಅತಿವೃಷ್ಟಿ/ನೆರೆಹಾವಳಿಯಿಂದ ಶೇ.33ಕ್ಕಿಂತ ಹೆಚ್ಚಿನ ಬೆಳೆ ಹಾನಿಗೆ ತುತ್ತಾದ ಕೃಷಿಕರಿಗೆ ಕೇಂದ್ರ ಸರ್ಕಾರದ ಎನ್.ಡಿ.ಆರ್.ಎಫ್/ಎಸ್.ಡಿ.ಆರ್.ಎಫ್ ಮಾರ್ಗ ಸೂಚಿಗಳ ಪ್ರಕಾರ ಗರಿಷ್ಟ 2 ಹೆಕ್ಟೇರ್‌ಗೆ ಸೀಮಿತಗೊಳಿಸಿ ಇನ್‌ಪುಟ್ ಸಬ್ಸಿಡಿಯನ್ನು ನೀಡಲಾಗುತ್ತದೆ. |

*ಕಂಇ 131 ಟಿಎನ್‌ಆರ್ 2021*

**(ಆರ್. ಅಶೋಕ)**
ಕಂದಾಯ ಸಚಿವರು